# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೨೦, ೨೦೧೪ (ಫಾಲ್ಗುಣ ೨೯, ಶಕ ವರ್ಷ ೧೯೩೫)<br>Bangalore, Thursday, March 20, 2014 (Phalguna 29, Shaka Varsha 1935) | ಸಂಚಿಕೆ ೧೨<br>Issue 12 |
|---|---|---|


## ಭಾಗ ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಛ ನ್ಯಾಯಾಲಯದ ಅಧಿಸೂಚನೆಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆಕುಕ 401 ಪಿಐಎಂ 2013, ಬೆಂಗಳೂರು, ದಿನಾಂಕ : 14ನೇ ಫೆಬ್ರವರಿ, 2014.**

ಶ್ರೀ ಪರ್ವತ ಮಲ್ಲಯ್ಯ, ಸಹಾಯಕ ಆಡಳಿತಾಧಿಕಾರಿ, ಜಿಲ್ಲಾ ಆಯುಷ್ ಕಛೇರಿ, ಮೈಸೂರು ಜಿಲ್ಲೆ, ಮೈಸೂರು, ಇವರಿಗೆ ವೇತನ ಶ್ರೇಣಿ ರೂ.28100–700–28800–800–33600–900–39000–1050–45300–1200–50100ರ ಆಡಳಿತಾಧಿಕಾರಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಯುಷ್ ನಿರ್ದೇಶನಾಲಯ, ಬೆಂಗಳೂರು, ಇಲ್ಲಿ ಖಾಲಿ ಇರುವ ಆಡಳಿತಾಧಿಕಾರಿ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್.ನರಸಿಂಹರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಭಾ.ವೈ.ಪ ಮತ್ತು ಸಮನ್ವಯ)

P.R. 88

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆಕುಕ 279 ಐಎಂಎಂ 2013, ಬೆಂಗಳೂರು, ದಿನಾಂಕ : 06ನೇ ಫೆಬ್ರವರಿ, 2014.**

ಶ್ರೀ ಕೆ.ಎಸ್.ಮಲ್ಲಿಕಾರ್ಜುನ, ಸಹಾಯಕ ಔಷಧ ನಿಯಂತ್ರಕರು, ಉತ್ತರ ಕನ್ನಡ ವೃತ್ತ, ಕಾರವಾರ ಇವರನ್ನು ಬೆಂಗಳೂರು ವೃತ್ತ–1 ರಲ್ಲಿ ಖಾಲಿ ಇರುವ ಸಹಾಯಕ ಔಷಧ ನಿಯಂತ್ರಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಜಾರಿಗೆ ಬರುವಂತೆ ವರ್ಗಾಯಿಸಿ ನೇಮಿಸಿದೆ.

ಈ ವರ್ಗಾವಣೆಯು ಕೋರಿಕೆ ವರ್ಗಾವಣೆಯಾಗಿರುವುದರಿಂದ, ವರ್ಗಾವಣೆ ಭತ್ಯೆಗಳಿಗೆ ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್.ನರಸಿಂಹರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಭಾ.ವೈ.ಪ ಮತ್ತು ಸಮನ್ವಯ)

P.R. 89

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆಕುಕ 279 ಐಎಂಎಂ 2013, ಬೆಂಗಳೂರು, ದಿನಾಂಕ : 07ನೇ ಫೆಬ್ರವರಿ, 2014.**

ಶ್ರೀ ಎಂ.ಸುರೇಶ್, ಸಹಾಯಕ ಔಷಧ ನಿಯಂತ್ರಕರು, ರಾಮನಗರ ವೃತ್ತ, ರಾಮನಗರ ಇವರನ್ನು ಬೆಂಗಳೂರಿನಲ್ಲಿ ಹೊಸದಾಗಿ ಸೃಜಿಸಿರುವ ಬೆಂಗಳೂರು ವೃತ್ತ–2 ಇಲ್ಲಿ ಖಾಲಿ ಇರುವ ಸಹಾಯಕ ಔಷಧ ನಿಯಂತ್ರಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್.ನರಸಿಂಹರಾಜು,**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

(ಭಾ.ವೈ.ಪ ಮತ್ತು ಸಮನ್ವಯ)

**P.R. 90**

## ಕರ್ನಾಟಕ ವಿಧಾನಸಭೆ ಸಚಿವಾಲಯ

**ಅಧಿಸೂಚನೆ**

**ಕ್ರಮ ಸಂಖ್ಯೆ : ಕವಿಸಸ/ಆ–1/267/ಎಫ್.ಪಿ.ಪಿ./2013, ಬೆಂಗಳೂರು, ದಿನಾಂಕ : 03ನೇ ಫೆಬ್ರವರಿ, 2014.**

**ವಿಷಯ:** ಕರ್ನಾಟಕ ವಿಧಾನಸಭೆ ಸಚಿವಾಲಯದ ಉಪ ಕಾರ್ಯದರ್ಶಿ(ಸಂ.ವ್ಯ.ವಿ.) ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii) ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ಉಪ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಸಿ.ಸಿ.ದಾಕ್ಷಾಯಣಮ್ಮ, ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.40050–1050–45300–1200–52500–1350–56550ರಲ್ಲಿ ಉಪ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

ಸಭಾಧ್ಯಕ್ಷರ ಆದೇಶಾನುಸಾರ,

**ನಜೀರ್ ಅಹಮದ್,**

ಅಧೀನ ಕಾರ್ಯದರ್ಶಿ,

ಕರ್ನಾಟಕ ವಿಧಾನಸಭೆ ಸಚಿವಾಲಯ

**P.R. 91**

**S.C. 50**

## ಕರ್ನಾಟಕ ವಿಧಾನಸಭೆ ಸಚಿವಾಲಯ

**ಅಧಿಸೂಚನೆ**

**ಕ್ರಮ ಸಂಖ್ಯೆ : ಕವಿಸಸ/ಆ–1/33/ಸ.ನಿ.ಶಾ.ಮುಂ./2012, ಬೆಂಗಳೂರು, ದಿನಾಂಕ : 03ನೇ ಫೆಬ್ರವರಿ, 2014.**

ವಿಷಯ: ಕರ್ನಾಟಕ ವಿಧಾನಸಭೆ ಸಚಿವಾಲಯದ ಶಾಖಾಧಿಕಾರಿ ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii) ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ಹಿರಿಯ ಸಹಾಯಕರುಗಳಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ನೌಕರರುಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.22800–600–24600–700–28800–800–33600–900–39000–1050–43200ರಲ್ಲಿ ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ)ಯ ತಿದ್ದುಪಡಿಯ ರೀತ್ಯಾ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) 2013ರ ಆದೇಶದ 3ನೇ ಕಂಡಿಕೆಯ ಉಪಬಂಧಗಳಿಗನುಸಾರವಾಗಿ ಪರಿಶೀಲನೆ ಮತ್ತು ಮರುಹೊಂದಾಣಿಕೆ ಮಾಡುವ ಷರತ್ತಿಗೊಳಪಟ್ಟು ತಾತ್ಕಾಲಿಕವಾಗಿ ಶಾಖಾಧಿಕಾರಿ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ.

1. ಶ್ರೀ ಜೆ.ಸನತ್ ಕುಮಾರ್
2. ಶ್ರೀ ಪುಟ್ಟ ಓಬಳರೆಡ್ಡಿ

ಸಭಾಧ್ಯಕ್ಷರ ಆದೇಶಾನುಸಾರ,

**ನಜೀರ್ ಅಹಮದ್,**

ಅಧೀನ ಕಾರ್ಯದರ್ಶಿ,

ಕರ್ನಾಟಕ ವಿಧಾನಸಭೆ ಸಚಿವಾಲಯ

**P.R. 92**

**S.C. 50**

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಕ್ರಮ ಸಂಖ್ಯೆ : ಕವಿಸಸ/ಆ–1/32/ಉ.ನಿ.ಅ.ಕಾ.ಮುಂ./2012, ಬೆಂಗಳೂರು, ದಿನಾಂಕ : 03ನೇ ಫೆಬ್ರವರಿ, 2014.**

**ವಿಷಯ:** ಕರ್ನಾಟಕ ವಿಧಾನಸಭೆ ಸಚಿವಾಲಯದ ಅಧೀನ ಕಾರ್ಯದರ್ಶಿ ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii) ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ಶಾಖಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ.ಎಸ್.ಗಣೇಶ, ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.28100–700–28800–800–33600–900–39000–1050–45300–1200–50100ರಲ್ಲಿ ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ)ಯ ತಿದ್ದುಪಡಿಯ ರೀತ್ಯಾ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) 2013ರ ಆದೇಶದ 3ನೇ ಕಂಡಿಕೆಯ ಉಪಬಂಧಗಳಿಗನುಸಾರವಾಗಿ ಪರಿಶೀಲನೆ ಮತ್ತು ಮರುಹೊಂದಾಣಿಕೆ ಮಾಡುವ ಷರತ್ತಿಗೊಳಪಟ್ಟು ತಾತ್ಕಾಲಿಕವಾಗಿ ಅಧೀನ ಕಾರ್ಯದರ್ಶಿ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ.

ಸಭಾಧ್ಯಕ್ಷರ ಆದೇಶಾನುಸಾರ,

**ನಜೀರ್ ಅಹಮದ್,**

ಅಧೀನ ಕಾರ್ಯದರ್ಶಿ,

ಕರ್ನಾಟಕ ವಿಧಾನಸಭೆ ಸಚಿವಾಲಯ

**P.R. 93**

**S.C. 50**

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಇಎನ್ 86 ಸಮನ್ವಯ 2014, ಬೆಂಗಳೂರು, ದಿನಾಂಕ : 10ನೇ ಜನವರಿ, 2014.**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 10 ಎಸ್ಎಎಸ್ 2014, ದಿನಾಂಕ:06–01–2014ರಲ್ಲಿ ಶ್ರೀ.ಡಿ.ಕಿರಣ್, ಐ.ಆರ್.ಎಸ್., ಹೆಚ್ಚುವರಿ ಆಯುಕ್ತರು (ಹಣಕಾಸು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ(ಬಿಬಿಎಂಪಿ), ಬೆಂಗಳೂರು ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇಲ್ಲಿಗೆ ನೇಮಿಸಲು ಇವರ ಸೇವೆಯನ್ನು ಇಂಧನ ಇಲಾಖೆಯ ವಶಕ್ಕೆ ನೀಡಲಾಗಿದೆ. ಅದರಂತೆ. ಶ್ರೀ.ಡಿ.ಕಿರಣ್, ಐ.ಆರ್.ಎಸ್., ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವ್ಯವಸ್ಥಾಪಕ ನಿರ್ದೇಶಕರು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಈ ಹುದ್ದೆಗೆ ಮರು ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 72(ಎ) ಮತ್ತು (ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಡಿ.ಕಿರಣ್, ಐ.ಆರ್.ಎಸ್., ಇವರನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇದರ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಲ್.ರಾಮಚಂದ್ರ,**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 54**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಹಿಂವಕ 99 ಬಿಇಟಿ 2013, ಬೆಂಗಳೂರು, ದಿನಾಂಕ : 06ನೇ ಫೆಬ್ರವರಿ, 2013.**

ಶ್ರೀ ಟಿ.ಜವರೇಗೌಡ, ಕೆ.ಎ.ಎಸ್ (ಕಿರಿಯ ಶ್ರೇಣಿ) ವಿಶೇಷ ಭೂಸ್ವಾಧೀನಾಧಿಕಾರಿ, ಮಂಡ್ಯ ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಸೂಚನೆ ದಿನಾಂಕ:31–01–2013ರನ್ವಯ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲಾಗಿದ್ದು, ಅದರಂತೆ ಸದರಿಯವರನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಮೈಸೂರು ಇಲ್ಲಿ ಖಾಲಿ ಇರುವ ಜಿಲ್ಲಾ ಅಧಿಕಾರಿ ಹುದ್ದೆಗೆ ಮರುಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಜಾತಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 55**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 14 SAS 2014, Bangalore, Dated: 29th January, 2014.

Sri. Pankaj Kumar Pandey, IAS (KN:2000), Officer on Special Duty (Expenditure Monitoring), Office of the Chief Electoral Officer of Karnataka is transferred with immediate effect and his services are placed at the disposal of Energy Department for being posted until further orders as Managing Director, Bangalore Electricity Supply Company Limited (BESCOM), Bangalore in the existing vacancy.

By Order and in the name of the Governor of Karnataka,
**U.H.Narayanaswamy,**
Under Secretary to Government,
DP & AR (Services-I).

**P.R. 94**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಸಿಆಸುಇ 56 ಸೆಅಸೆ 2014, ಬೆಂಗಳೂರು, ದಿನಾಂಕ : 30ನೇ ಜನವರಿ, 2014.

ಶ್ರೀ ಶಿವಯೋಗಿ ಸಿ. ಕಳಸದ್, ಭಾ.ಆ.ಸೇ., ಆಯುಕ್ತರು, ಭೂ ಸ್ವಾಧೀನ, ಪುನರ್ ವಸತಿ ಮತ್ತು ಪುನರ್ ನಿರ್ಮಾಣ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೊಸದಾಗಿ ಸೃಜಿಸಲಾಗಿರುವ ಆಯುಕ್ತರು ರಾಜ್ಯ ಪುನರ್‌ವಸತಿ ಮತ್ತು ಪುನರ್‌ನಿರ್ಮಾಣ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆಯ ಅಧಿಕ ಪ್ರಭಾರದಲ್ಲಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಹೆಚ್. ನಾರಾಯಣಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ. (ಸೇವೆಗಳು-1).

**P.R. 95**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಸಿಆಸುಇ 82 ಸೆಅಸೆ 2014, ಬೆಂಗಳೂರು, ದಿನಾಂಕ : 31ನೇ ಜನವರಿ, 2014.

ಶ್ರೀ ಎಂ.ಎನ್. ವಿದ್ಯಾಶಂಕರ್, ಭಾ.ಆ.ಸೇ., ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಕೆ ಇವರ ದಿನಾಂಕ 31-1-2014 ವಯೋನಿವೃತ್ತಿಯಿಂದ ತೆರವಾಗುವ ಹುದ್ದೆಯಲ್ಲಿ ಶ್ರೀ ತುಷಾರ್ ಗಿರಿನಾಥ್, ಭಾ.ಆ.ಸೇ., ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಗಣಿ, ಸಣ್ಣ ಪ್ರಮಾಣ ಕೈಗಾರಿಕೆ ಹಾಗೂ ಜವಳಿ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕ ಪ್ರಭಾರದಲ್ಲಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಹೆಚ್. ನಾರಾಯಣಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ. (ಸೇವೆಗಳು-1).

**P.R. 96**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಸಿಆಸುಇ 47 ಸೆಅಸೆ 2014, ಬೆಂಗಳೂರು, ದಿನಾಂಕ : 22ನೇ ಜನವರಿ, 2014.

ಶ್ರೀ ಅಮ್ಲಾನ್ ಆದಿತ್ಯ ಬಿಸ್ವಾಸ್, ಭಾ.ಆ.ಸೇ., ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರನ್ನು ಕಾರ್ಯದರ್ಶಿ, ಹೈದರಾಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಗುಲಬರ್ಗಾ ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ಅಧಿಕ ಪ್ರಭಾರದಲ್ಲಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಹೆಚ್. ನಾರಾಯಣಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ. (ಸೇವೆಗಳು-1).

**P.R. 97**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59.